ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 37(206)
2. ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)
3. ಉತ್ತರಿಸುವ ದಿನಾಂಕ : 02.02.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಹಾರೋಹಳ್ಳಿ ಕೈಗಾರಿಕಾ ವಲಯದಲ್ಲಿ ಅಗ್ನಿ ಶಾಮಕ ಕೇಂದ್ರವಿಲ್ಲದೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಬಂದಿದೆ.<br><br>ಹಾರೋಹಳ್ಳಿ ಕೈಗಾರಿಕಾ ಪ್ರದೇಶದಲ್ಲಿ ಅಗ್ನಿಶಾಮಕ ಠಾಣೆಯನ್ನು ಸ್ಥಾಪಿಸುವಂತೆ ಕೋರಿ ಹಾರೋಹಳ್ಳಿ ಕೈಗಾರಿಕಾ ಸಂಘವು ದಿನಾಂಕ: 22.05.2020ರಂದು ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.<br><br>ಹಾರೋಹಳ್ಳಿ 2ನೇ ಹಂತದ ಕೈಗಾರಿಕಾ ಪ್ರದೇಶದಲ್ಲಿ ನಿವೇಶನ ಸಂಖ್ಯೆ: 214ರಲ್ಲಿ 4.00 ಎಕರೆ ಪ್ರದೇಶವನ್ನು ನಾಗರೀಕ ಸೌಲಭ್ಯಕ್ಕಾಗಿ (Amenity) ಕಾಯ್ದಿರಿಸಲಾಗಿದೆ. ಈ ಪೈಕಿ 2.00 ಎಕರೆ ಪ್ರದೇಶವನ್ನು ಅಗ್ನಿಶಾಮಕ ಇಲಾಖೆಗೆ ಅಗ್ನಿಶಾಮಕ ಠಾಣೆ ಸ್ಥಾಪಿಸುವ ಉದ್ದೇಶಕ್ಕಾಗಿ ಉಚಿತವಾಗಿ ಹಂಚಿಕೆ ಮಾಡಲು ದಿನಾಂಕ: 30.01.2021ರಂದು ನಡೆದ ಮಂಡಳಿ ಸಭೆಯಲ್ಲಿ ನಿರ್ಣಯಿಸಲಾಗಿದೆ. |
| (ಆ) | ಕೈಗಾರಿಕಾ ವಲಯಗಳಲ್ಲಿ ಅಗ್ನಿ ಶಾಮಕ ಕೇಂದ್ರ ಇರಲೇಬೇಕೆಂಬ ನಿಯಮವಿದೆಯೇ; ಆಗಿದ್ದಲ್ಲಿ; ಈ ವಲಯದಲ್ಲಿ ಅಗ್ನಿ ಶಾಮಕ ಕೇಂದ್ರ ತೆರೆಯದಿರಲು ಕಾರಣವೇನು? | ಕೈಗಾರಿಕಾ ಪ್ರದೇಶಗಳಿಗೆ ಹತ್ತಿರದಲ್ಲಿರುವ ಅಗ್ನಿಶಾಮಕ ಠಾಣೆಯು ಎಷ್ಟು ದೂರದಲ್ಲಿದೆ ಹಾಗೂ ಪ್ರಸ್ತಿತ ಕೈಗಾರಿಕಾ ಪ್ರದೇಶಗಳಿಗೆ ತುರ್ತು ಸಂದರ್ಭದಲ್ಲಿ ಹೋಗಲು ಸಾಧ್ಯವೇ ಎಂಬ ಮಾಹಿತಿಯನ್ನು ವಿಶ್ಲೇಷಿಸಿ, ವಿವಿಧ ಹಂತಗಳನ್ನು ಸೇರಿಸಿ ಒಂದು Cluster ಗೆ ಅಗ್ನಿಶಾಮಕ ಠಾಣೆ ಪ್ರಾರಂಭಿಸುವ ಕುರಿತು ಅಗ್ನಿಶಾಮಕ ಇಲಾಖೆಯನ್ನು ಕೋರಲಾಗುತ್ತದೆ.<br><br>ಹಾರೋಹಳ್ಳಿ ಕೈಗಾರಿಕಾ ಪ್ರದೇಶದಲ್ಲಿ ಈಗ ಹೆಚ್ಚಿನ ಕೈಗಾರಿಕೆಗಳು ಸ್ಥಾಪನೆ ಆಗುತ್ತಿರುವುದರಿಂದ, ಈ ಕೈಗಾರಿಕಾ ಪ್ರದೇಶದಲ್ಲಿ ಅಗ್ನಿಶಾಮಕ ಠಾಣೆ ನಿರ್ಮಿಸಲು ದಿನಾಂಕ: 30.01.2021 ರಂದು ನಡೆದ ಕೆ.ಐ.ಎ.ಡಿ.ಬಿ. ಮಂಡಳಿ ಸಭೆಯಲ್ಲಿ 2 ಎಕರೆ ಪ್ರದೇಶವನ್ನು ಉಚಿತವಾಗಿ ಹಂಚಿಕೆ ಮಾಡಲು ನಿರ್ಣಯಿಸಿದ್ದು, ಹಂಚಿಕೆ ಮಾಡಿದ ನಂತರ ಅಗ್ನಿಶಾಮಕ ಇಲಾಖೆಯು ಅಗ್ನಿಶಾಮಕ ಠಾಣೆಯನ್ನು ನಿರ್ಮಿಸುತ್ತದೆ. |

ಸಂಖ್ಯೆ: ಸಿಐ 22 ಐಎಪಿ (ಇ) 2021

(ಜಗದೀಶ ಶೆಟ್ಟರ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು